ವಿಕ್ಟರ್ ದಶ್ಕೆವಿಚ್

# ಬಣ್ಣಬಣ್ಣದ ಮೀನುಗಳು





*Betta splendens*



*Barbus spes (Odessa-Barbe)*



*Badis badis*



*Cichlasoma cyanoguttatum*



*Julidochromis ornatus*



*Carassius auratus auratus*



*Metynnis hypsauchen*



*Aphyosemion walkeri*



*Enneacanthus obesus*



*Trichogaster trichopterus spec. gold*





*Trichogaster "cosby"*

*Pterophyllum eimekei*



*Barbus conchonius*



*Xiphophorus helleri*



*Lebistes reticulatus*



*Brachydanio rerio*

ವೀಕ್ತರ್ ದತ್ಸ್ಕೆವಿಚ್

# ಬಣ್ಣಬಣ್ಣದ ಮೀನುಗಳು

ಅನುವಾದ: ಜಿ. ಎನ್. ರಂಗನಾಥರಾವ್

ಫೋಟೋಚಿತ್ರಗಳು: ಲೇಖಕರಿಂದ

ವಿನ್ಯಾಸ: ಲೀಯಾ ಒರ್ಲೋವಾ


ರಾದುಗ ಪ್ರಕಾಶನ
ಮಾಸ್ಕೋ


ನವಕರ್ನಾಟಕ ಪಬ್ಲಿಕೇಷನ್ಸ್
ಪ್ರೈವೆಟ್ ಲಿಮಿಟೆಡ್
ಬೆಂಗಳೂರು

ಮನೆಗಳು... ಮನೆಗಳು... ಮನೆಗಳು...

ಹಲವು ಹನ್ನೊಂದು ಬಗೆಯ ಮನೆಗಳು. ಮರದ ಮನೆಗಳು, ಇಟ್ಟಿಗೆ ಮನೆಗಳು, ಮಂಜಿನ ಮನೆಗಳು, ಸಿಮೆಂಟ್ ಕಾಂಕ್ರೀಟ್‌ನ ಮನೆಗಳು. ಆದರೆ ನೀವಿಂದು ಭೇಟಿ ಮಾಡಲಿರುವ ನಿವಾಸಿಗಳು ವಾಸಿಸುವ ಮನೆಯಲ್ಲಿ ಎಲ್ಲವೂ ಗಾಜಿನವೇ: ನೆಲವೂ ಗಾಜಿನದೇ, ಗೋಡೆಗಳೂ ಗಾಜಿನವೇ. ನಿಮ್ಮನ್ನು ಅದ್ಭುತರಮ್ಯ ಲೋಕಕ್ಕೆ ಒಯ್ಯುವ ಯಕ್ಷಿಣಿ ಕಥೆಗಳಲ್ಲಿ ಬರುವ ಮನೆಗಳಂತೆ ಈ ಮನೆಗೆ ಕಿಟಕಿಗಳಿಲ್ಲ, ಬಾಗಿಲುಗಳಿಲ್ಲ. ಇದನ್ನು ಅಕ್ವೇರಿಯಂ ಅಥವಾ ಮೀನು ತೊಟ್ಟಿ ಎಂದು ಕರೆಯುತ್ತಾರೆ.



ಅಕ್ವೇರಿಯಂನಲ್ಲಿ ಹಲವು ಬಗೆಯ ಮೀನುಗಳು ವಾಸಿಸುತ್ತವೆ. ಕೆಲವು ದೊಡ್ಡವು, ನಿಮ್ಮ ಕೈಗಳಿಗಿಂತ ದೊಡ್ಡವು, ಇನ್ನು ಕೆಲವು ನಿಮ್ಮ ಬೆರಳಿನ ಉಗುರಿನಷ್ಟು ಚಿಕ್ಕವು. ಬಹುತೇಕ ಮೀನುಗಳು ಶಾಖದ, ಉಷ್ಣವಲಯದ ದೇಶಗಳಿಂದ ಬಂದಿವೆ. ಅಲ್ಲಿಗೆ ನಿಮ್ಮಲ್ಲಿ ಹೆಚ್ಚು ಮಂದಿ ಹೋಗಿಲ್ಲದಿರಬಹುದು. ಆ ದೇಶಗಳಿಗೆ ಹೋದವರಿಗೂ, ನದಿಯಲ್ಲಿ ಸ್ವತಂತ್ರವಾಗಿ ಈಜುತ್ತಿರುವ ಈ ಮೀನುಗಳನ್ನು ಗುರುತಿಸುವುದು ಸುಲಭವೇನಲ್ಲ. ಅವುಗಳ ಜೀವನ ವಿಧಾನ, ಸಂತಾನಾಭಿವೃದ್ಧಿ ಮೊದಲಾದವುಗಳನ್ನು ವೀಕ್ಷಿಸುವುದಂತೂ ಇನ್ನೂ ಕಷ್ಟ. ಆದರೆ ಅಕ್ವೇರಿಯಂನಲ್ಲಿ ಇವೆಲ್ಲ ವನ್ನೂ ಚೆನ್ನಾಗಿ ನೋಡಬಹುದು. ಮೀನುಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡುವ ಮೂಲಕ, ಅವುಗಳ ಚಟುವಟಿಕೆ ಗಳನ್ನು ಗಮನಿಸುವ ಮೂಲಕ ಅವುಗಳ ಬಗ್ಗೆ ಹಲವಾರು ಕುತೂಹಲಕರ ಸಂಗತಿಗಳನ್ನು ತಿಳಿಯಬಹುದು. ಅವು ಹೇಗೆ ಆಹಾರ ಸೇವಿಸುತ್ತವೆ, ಹೇಗೆ ಮೊಟ್ಟೆಗಳನ್ನು ಇಡುತ್ತವೆ, ಮರಿಗಳನ್ನು ಹೇಗೆ ಜೋಪಾನವಾಗಿ ಬೆಳೆಸುತ್ತವೆ ಇತ್ಯಾದಿ ವಿಷಯಗಳನ್ನು ತಿಳಿಯಬಹುದು.

## ಕತ್ತಿ ಬಾಲದ ಮೀನು

ಕತ್ತಿಬಾಲದ ಮೀನುಗಳಿಗೆ ಬಾಲದ ಮೇಲೆ ಕತ್ತಿಯಂಥ ಒಂದು ಉದ್ದವಾದ ಅಂಗವಿರುತ್ತದೆ. ಆದ್ದರಿಂದಲೇ ಅವಕ್ಕೆ ಈ ಹೆಸರು. ಈ ಜಾತಿಯ ಮೀನುಗಳು ದಕ್ಷಿಣ ಅಮೆರಿಕದ ಸಣ್ಣ ಕೊಳಗಳಲ್ಲಿ ವಾಸಿಸುತ್ತವೆ. ಬೇಸಿಗೆಯಲ್ಲಿ ಕೊಳ ಬತ್ತಿದರೆ ನೆಲದ ಮೂಲಕ ಅವು



ಬೇರೊಂದು ಕೊಳ ತಲುಪುತ್ತವೆ. ಈ ಮೀನುಗಳು ಸುರುಳಿಯಂತೆ ಸಿಂಬಿ ಸುತ್ತಿಕೊಂಡು, ಬಾಲದಲ್ಲಿನ ಕತ್ತಿಯನ್ನೇ ಸನ್ನೆಗೋಲಾಗಿಸಿಕೊಂಡು ನೆಗೆಯುತ್ತವೆ. ಇವು ಹೆಚ್ಚು ನೀರಿರುವ ಕೊಳ ಸಿಗುವವರೆಗೆ ಹೀಗೆ ನೆಗೆಯುತ್ತ ಪ್ರಯಾಣ ಮುಂದುವರಿಸುತ್ತವೆ. ಈಜುವಾಗ ಇವು ಬಾಲದಲ್ಲಿನ ಕತ್ತಿಯನ್ನು ಚುಕ್ಕಾಣಿಯಾಗಿ ಬಳಸುತ್ತವೆ. ಚಿತ್ರದಲ್ಲಿರುವ ಮೀನಿಗೆ ಬಾಲದಲ್ಲಿ ಒಂದೇ ಕತ್ತಿ ಇದೆ. ಆದರೆ ಕೆಲವು ವೇಳೆ ಎರಡು, ಮೂರು ಅಥವಾ ಐದು ಕತ್ತಿಗಳೂ ಇರುವುದುಂಟು.

## ಬಣ್ಣಬಣ್ಣದ ಗುಪ್ಪಿ ಮೀನು

ಬಣ್ಣಬಣ್ಣದ ಗುಪ್ಪಿ ಮೀನುಗಳ ಗುಂಪನ್ನು ಕಂಡಾಗ ಯಾವ ಕಡೆ ಮೊದಲು ನೋಡುವುದು ಎಂದು ನಿಮಗೆ ಕಕ್ಕಾಬಿಕ್ಕಿಯಾಗುವುದು ಸಹಜ. ಪುಟ್ಟ, ಚುರುಕಾಗಿರುವ ಅವು ಸದಾ ಚಲಿಸುತ್ತಿರುತ್ತವೆ. ತುಂಬ ಆಕರ್ಷಣೀಯವಾದ,



ವರ್ಣರಂಜಿತವಾದ ಈ ಮೀನುಗಳ ಸಂತಾನ ವೃದ್ಧಿಗೊಳಿಸಲು ಅಕ್ವೇರಿಯಂ ಪ್ರಿಯರಿಗೆ ಸಾಕಷ್ಟು ಶ್ರಮವಾಯಿತು. ತಾಯ್ನಾಡಾದ ದಕ್ಷಿಣ ಅಮೆರಿಕದಲ್ಲೂ ವರ್ಣರಂಜಿತ ಗುಪ್ಪಿ ಮೀನುಗಳು ಅಪರೂಪ. ಅಲ್ಲಿ ಅವು ಬೂದುಬಣ್ಣದ್ದಾಗಿವೆ. ಜೊತೆಗೆ ಅವಕ್ಕೆ ಸಣ್ಣ ಸಣ್ಣ ಈಜುರೆಕ್ಕೆಗಳು. ಇದರಿಂದಾಗಿ ಈ ಮೀನುಗಳಿಗೆ ದೊಡ್ಡ ಮೀನುಗಳಿಂದ ಅಥವಾ ಹಕ್ಕಿಗಳಿಂದ ಪ್ರಾಣಭಯ ಇಲ್ಲ.

## ಕಡುಗಪ್ಪು ಮೀನು

ಅಕ್ವೇರಿಯಂನಲ್ಲಿ ಇದಕ್ಕಿಂತ ಕಪ್ಪಾದ ಮೀನು ಬೇರೊಂದಿಲ್ಲ. ಇದಕ್ಕೆ ಕಪ್ಪು ಮೋಲ್ಲಿ ಎಂದು ಹೆಸರು. ಈ ಮೀನಿನ ಬಾಲ ಗಮನಿಸಿ, ಅರ್ಧ ಚಂದ್ರಾಕೃತಿಯಲ್ಲಿದೆ. (ಆದ್ದರಿಂದ ಕನ್ನಡದಲ್ಲಿ ಇದಕ್ಕೆ ಅರ್ಧ ಚಂದ್ರಾಕೃತಿ ಬಾಲದ ಮೀನು ಎಂಬ ಹೆಸರು ಬಳಕೆಯಲ್ಲಿದೆ. –



ಅನು.) ಇದರ ಮರಿಗಳೂ ಅಷ್ಟೇ ಕಪ್ಪು. ತುಂಬ ಚುರುಕು. ಹುಟ್ಟಿದ ತಕ್ಷಣವೇ ಇವು ಆಹಾರ ಹುಡುಕಿಕೊಂಡು ಹೊರಡುತ್ತವೆ.

ಈ ಕಡುಗಪ್ಪು ಮೀನುಗಳು ನದಿಗಳಲ್ಲಿ ವಾಸಿಸುತ್ತವೆ. ಕೆಲವೊಮ್ಮೆ ಶತ್ರುಗಳು – ಸೂಕ್ಷ್ಮಾಣು ಜೀವಿಗಳು – ಇವುಗಳ ಮೇಲೆ ಆಕ್ರಮಣ ನಡೆಸುತ್ತವೆ. ಆಗ ಇವು ಈಜಿಕೊಂಡು ಸಮುದ್ರ ಸೇರುತ್ತವೆ.

ಮೀನಿನ ದೇಹ ಸೇರಿದ್ದ ಸೂಕ್ಷ್ಮಾಣು ಜೀವಿಗಳು ಸಮುದ್ರದ ಉಪ್ಪುನೀರಿನಲ್ಲಿ ಸಾಯುತ್ತವೆ. ಮೀನುಗಳು ನದಿಗೆ ವಾಪಸ್ಸಾಗುತ್ತವೆ.

## ಬಂಗಾರದ ಗೌರಾಮಿ ಮೀನು

ಬಂಗಾರದ ಗೌರಾಮಿ ಮೀನಿಗೆ ಎದೆಯ ಬಳಿ ಈಜುರೆಕ್ಕೆಗಳ ಬದಲು ತೆಳುವಾದ ಉದ್ದವಾದ ಪುಟ್ಟ ಮೀಸೆಗಳು ಇರುತ್ತವೆ. ಈ ಮೀಸೆಗಳು ಕೈಗಳಂತೆ ಸದಾ ಚಲಿಸುತ್ತಿರುತ್ತವೆ. ಕುತೂಹಲಕಾರಿಯಾದದ್ದು



ಏನಾದರೂ ಕಂಡರೆ ಅದೇನೆಂದು ತಿಳಿಯಲು ಗೌರಾಮಿ ಮೀನು ಮೀಸೆಗಳನ್ನು ಹೊರಚಾಚಿ ಸ್ಪರ್ಶಿಸಿ ನೋಡುತ್ತದೆ. ಹೀಗೆ ಅಕ್ವೇರಿಯಂ ಒಳಗಿನ ಸಸ್ಯ, ಗಾಜಿನ ಗೋಡೆ, ಪುಟ್ಟ ಹುಳುಗಳು ಇವೆಲ್ಲವನ್ನು ಅದು ತನ್ನ ಮೀಸೆಗಳಿಂದ ಸ್ಪರ್ಶಿಸಿ ತಿಳಿಯುತ್ತದೆ. ಇನ್ನೊಂದು ಮೀನು ಎದುರಾದಾಗ ಹಸ್ತಲಾಘವವಿತ್ತು ಶುಭಾಶಯ ಹೇಳುವಂತೆ ಮೀಸೆಗಳಿಂದ ಅದನ್ನು ತಟ್ಟುತ್ತದೆ.

## ನೀರಿನಡಿ ನಡುಗಡ್ಡೆ

ಈ ಸುಂದರವಾದ ಮೀನನ್ನು ನೋಡಿ. ಇದರ ಮೈ ಮೇಲೆ ಮುತ್ತಿನ ಹರಳುಗಳನ್ನು ಹೊಲಿದಿರುವಂತಿದೆ. ಆದ್ದರಿಂದಲೇ ಇರಬೇಕು ಇದಕ್ಕೆ ಮುತ್ತಿನ ಗೌರಾಮಿ ಎಂಬ ಹೆಸರು ಬಂದಿರುವುದು.

ಮೊಟ್ಟೆ ಇಡುವ ಸಮಯ ಬಂದಾಗ ಗೌರಾಮಿ ನೀರಿನಲ್ಲಿ



ತೇಲುತ್ತಿರುವ ಪುಟ್ಟಪುಟ್ಟ ಎಲೆಗಳನ್ನೂ ರೆಂಬೆಗಳನ್ನೂ ಕಚ್ಚಿ ತಂದು ಅವನ್ನು ಗಾಳಿಗುಳ್ಳೆಗಳಿಂದ ಮಾಡಿದ ಒಂದು ರೀತಿಯ ನೊರೆಯಿಂದ ಅಂಟಿಸಿ ಗೂಡು ನಿರ್ಮಿಸುತ್ತೆ. ಈ ಗೂಡು ನೀರಿನಡಿ ಒಂದು ಪುಟ್ಟ ನಡುಗಡ್ಡೆಯಂತಿರುತ್ತೆ. ಗೌರಾಮಿ ತನ್ನ ಮೊಟ್ಟೆಗಳನ್ನು ಅದರಲ್ಲಿ ಬಚ್ಚಿಡುತ್ತದೆ – ಅವು ನೀರಿನಲ್ಲಿ ಕೊಚ್ಚಿ ಹೋಗದಿರಲೆಂದು ಮತ್ತು ಇತರ ಮೀನುಗಳಿಂದ ತಿನ್ನಲ್ಪಡದಿರಲೆಂದು. ಅನಂತರ ಅದು ಗೂಡಿನ ಬಳಿ ಕಾವಲು ನಿಲ್ಲುತ್ತೆ, ಮರಿಗಳು ಹೊರಬರುವವರೆಗೂ.

## ಕಾಳಗದ ಮೀನು

ಇದು ಫಳಫಳಿಸುವ ಉಜ್ವಲ ಬಣ್ಣದಿಂದ ಪ್ರಜ್ವಲಿಸುತ್ತದೆ. ಕೆಂಪು, ನೀಲಿ ಅಥವಾ ಹಸಿರು ಬಣ್ಣಗಳಲ್ಲಿ ಈ ಮೀನುಗಳನ್ನು ನೀವು ಕಾಣಬಹುದು. ಈ ಮೀನು ಆಕ್ರಮಣಕಾರಿಯಾದ್ದರಿಂದಲೇ ಇದಕ್ಕೆ ಕಾಳಗದ ಮೀನು ಎಂದು ಹೆಸರು. ಕಾಳಗ ನಡೆಸದೆ



ಅದು ಬೇರೊಂದನ್ನು ಭೇಟಿಯಾಗದು. ಒಂದು ಇನ್ನೊಂದನ್ನು ಎದುರಾದದ್ದೇ ತಡ ಪರಸ್ಪರರ ಮೇಲೆ ಬೀಳುತ್ತವೆ. ಇವು ಪರಸ್ಪರ ಕಾದಾಡುತ್ತವೆ. ಕಾದಾಟದಲ್ಲಿ ಈಜುರೆಕ್ಕೆಗಳನ್ನು ಚಿಂದಿಚಿಂದಿ ಮಾಡುತ್ತವೆ. ಆದರೆ ಅವಕ್ಕೆ ಇದೇನೂ ಅಂಥ ಆಪತ್ತಲ್ಲ. ಏಕೆಂದರೆ ಈಜುರೆಕ್ಕೆಗಳು ಮತ್ತೆ ಬೆಳೆಯುತ್ತವೆ. ಆದರೆ ಈ ಹೋರಾಟದಲ್ಲಿ ಅವಕ್ಕೆ ಮುಕ್ಕಾಗುವುದೆಂದರೆ ಅವುಗಳ ಹೆಮ್ಮೆ ಮಾತ್ರ.

## ಗಾಜಿನ ಮೀನು

ಇದು ಪಾರದರ್ಶಕ ಮೀನು. ಎಷ್ಟು ಪಾರದರ್ಶಕ ಎಂದರೆ ಅದರ ಅಸ್ಥಿಪಂಜರವನ್ನು ನೀವು ನೋಡಬಹುದು. ಅದನ್ನು ನೀರಿನಲ್ಲಿ ಗುರುತಿಸುವುದು ಕಷ್ಟ. ಅದರಲ್ಲೂ ಸಸ್ಯಗಳ ಮಧ್ಯೆ ಕಣ್ಮರೆಯಾದಾಗ ಅದನ್ನು ಗಮನಿಸುವುದು ತುಂಬಾ ಕಷ್ಟ. ಹರಿತವಾದ ಹಲ್ಲಿನ, ಪ್ರಾಣಿಗಳನ್ನು ಕೊಂದು ತಿನ್ನುವುದರಲ್ಲೇ ಜೀವನ ಸಾಗಿಸುವ ಶತ್ರು ವೇಗವಾಗಿ ಇದರ



ಬೆನ್ನಟ್ಟಿದಾಗ ಅದಕ್ಕೆ ವಿಸ್ಮಯ ಕಾದಿರುತ್ತದೆ. ಏಕೆಂದರೆ ಶತ್ರು ಕಾಣುವುದು ಮೀನನ್ನಲ್ಲ, ಕೇವಲ ಅಸ್ಥಿಪಂಜರವನ್ನು. ಆಗ ಶತ್ರು ಇದು ಬೇರಾವುದೋ ಪ್ರಾಣಿ ತಿಂದು ಮುಗಿಸಿದ ಮೀನಿನ ಅಸ್ಥಿಪಂಜರ ಇರಬೇಕು ಎಂಬ ನಿರ್ಧಾರಕ್ಕೆ ಬರುತ್ತದೆ. ಶತ್ರು ಒಮ್ಮೆ ಅಸ್ಥಿಪಂಜರ ದತ್ತ ಕಣ್ಣು ಹಾಯಿಸಿ ಮುಂದೆ ಸಾಗುತ್ತದೆ. ಗಾಜಿನ ಮೀನಿಗೆ ಬೇಕಾದದ್ದೂ ಇದೇ. ಅದು ತನ್ನ ಈಜುರೆಕ್ಕೆಗಳನ್ನು ಬಿಚ್ಚಿ ಪಟಪಟಿಸುತ್ತಾ, ಬಾಲ ಅಲ್ಲಾಡಿಸಿ ಆಹಾರಕ್ಕಾಗಿ ಹುಳುವನ್ನು ಹುಡುಕಿಕೊಂಡು ಹೋಗುತ್ತೆ. ಇದು ನದಿಯಲ್ಲಿ ಅಕ್ವೇರಿಯಂನಷ್ಟು ಸುಲಭ ಸಾಧ್ಯವಲ್ಲ. ಅಕ್ವೇರಿ ಯಂನಲ್ಲಾದರೋ ಇದರ ಊಟಕ್ಕಾಗಿ ಮೊದಲೇ ಬಿಟ್ಟ ಜೀವಂತ ಹುಳುಗಳು ಸಿದ್ಧವಿರುತ್ತವೆ.

## ನಿಗೂಢ ಮೀನು

ಇದೊಂದು ನಿಗೂಢ ಮೀನು. ಇದು ಉಷ್ಣವಲಯದ ದೇಶಗಳಲ್ಲಿ ಆಳವಿರದ ಕೊಳಗಳಲ್ಲಿ ಹಾಗೂ ಹಳ್ಳಗಳಲ್ಲಿ ವಾಸಿಸುತ್ತದೆ. ಬೇಸಿಗೆ ಶುರುವಾದಾಗ ಕೊಳಗಳೂ ಹಳ್ಳಗಳೂ



ಬತ್ತಿ ಇವು ಸಾಯುತ್ತವೆ. ಆದರೆ ಮಳೆಗಾಲ ಶುರುವಾದೊಡನೆ ಇವಕ್ಕೆ ಪುನರ್ಜನ್ಮ.... ಈ ಮೀನುಗಳ ಮೊಟ್ಟೆಗಳು ಸಣ್ಣಪುಟ್ಟ ಕೊಳಗಳ, ಹಳ್ಳಗಳ ತಳದಲ್ಲಿನ ಕೆಸರು ಮಣ್ಣಿನಲ್ಲಿ ತಿಂಗಳುಗಟ್ಟಲೆ ನೀರಿಲ್ಲದೆ ಬದುಕಿರಬಲ್ಲವು. ಮಳೆ ಬಿದ್ದೊಡನೆ ಮೊಟ್ಟೆ ನೀರ ಮೇಲೆ ಬಂದು ಒಡೆದು ಮರಿಗಳು ಹೊರಬರುತ್ತವೆ.

## ಸಂಚಾರಿ ಮೀನು

ಈ ಮೀನನ್ನು ಅದರ ಉಜ್ವಲ ಬಣ್ಣದಿಂದಾಗಿ ನೀಲಿ ಗುಲಾರಿಸ್ ಎಂದು ಕರೆಯುತ್ತಾರೆ. ಬಹು ಸಮಯ ಇದನ್ನು ಮರದ ಪೊಟರೆಗಳಲ್ಲಿ ಕಾಣಬಹುದು. ಇವು ಭೂಮಿಯ ಮೇಲೆ ಬರುವುದು ಹೇಗೆ ಸಾಧ್ಯವಾಯಿತು? ಪಕ್ಕಿಗಳ ಸಹಾಯದಿಂದ. ಹಕ್ಕಿಗಳು ಕ್ರಿಮಿಗಳನ್ನು



ಬೇಟೆಯಾಡಲು ಆಳವಿಲ್ಲದ ಹಳ್ಳಗಳಿಗೆ ಹೋದಾಗ ಕೆಸರು, ಅದರ ಜೊತೆಗೆ ಈ ಮೀನಿನ ಮೊಟ್ಟೆಗಳು, ಅವುಗಳ ಪಾದಗಳಿಗೆ ಅಂಟಿಕೊಳ್ಳುತ್ತವೆ. ಆಹಾರ ಸಿಕ್ಕ ಕೂಡಲೇ ಹಕ್ಕಿಗಳು ಮರದ ಪೊಟರೆಯಲ್ಲಿನ ತಮ್ಮ ಗೂಡಿಗೆ ವಾಪಸ್ಸಾಗುತ್ತವೆ. ಗೂಡಿನಲ್ಲಿ ಪಾದಗಳಿಗೆ ಅಂಟಿದ ಕೆಸರು ಮಣ್ಣನ್ನು ಒರೆಸಿಕೊಳ್ಳುತ್ತವೆ. ಪಾದಗಳನ್ನು ಶುದ್ಧಗೊಳಿಸಿದಾಗ ಅವಕ್ಕೆ ಅಂಟಿದ ಮೊಟ್ಟೆಗಳು ಮಣ್ಣಿನ ಸಮೇತ ಪೊಟರೆಯಲ್ಲಿ ಬೀಳುತ್ತವೆ, ಒಡೆದು ಮರಿಗಳಾಗುತ್ತವೆ.

## ನೀಲಿ ನಿಯಾನ್ ಟೆಟ್ರ ಮೀನು

ಈ ಮೀನುಗಳು ಗುಂಪುಗುಂಪಾಗಿ ದಕ್ಷಿಣ ಅಮೆರಿಕದ ಸಣ್ಣ ನದಿಗಳಲ್ಲಿ ವಾಸಿಸುತ್ತವೆ. ಉಷ್ಣವಲಯದ ಅರಣ್ಯ ನದಿಗಳ ಮೇಲೆ ಹಸಿರು ಛಾವಣಿ ಇದ್ದಂತೆ ಮರಗಳ ಎಲೆಗಳು ಎಷ್ಟು ದಟ್ಟವಾಗಿರುತ್ತವೆಂದರೆ ಸೂರ್ಯರಶ್ಮಿ ಅವನ್ನು ಭೇದಿಸಿಕೊಂಡು ತಳ ಮುಟ್ಟು



ವುದು ಸಾಧ್ಯವೇ ಇಲ್ಲ. ಆದ್ದರಿಂದ ಈ ನದಿಗಳ ನೀರು ಸದಾ ಕಪ್ಪು. ಕತ್ತಲೆಯ ವಾಸಕ್ಕೆ ಒಗ್ಗಿರುವ ಈ ಮೀನುಗಳು ತಮ್ಮ ಮೈಮೇಲಿನ ಉಜ್ವಲ ನೀಲಿ ಪಟ್ಟೆಯಿಂದ ಪರಸ್ಪರ ಗುರುತಿಸುತ್ತವೆ.

ಸೂರ್ಯಕಿರಣದ ಒಂದಂಶ ನೀರ ಮೇಲೆ ಬಿದ್ದಲ್ಲಿ ನೀಲಿ ಪಟ್ಟೆಗಳು ನಗರದ ಬೀದಿಗಳಲ್ಲಿ ರಾತ್ರಿಯ ಹೊತ್ತು ಮಿನುಗುವ ನಿಯಾನ್ ಜಾಹೀರಾತಿನಂತೆ ಮಿನುಗುತ್ತವೆ. ಆದ್ದರಿಂದಲೇ ಈ ಮೀನಿಗೆ ನೀಲಿ ನಿಯಾನ್ ಟೆಟ್ರ ಎಂದು ಹೆಸರು.

## ಕೆಂಪು ನಿಯಾನ್ ಮೀನು

ಈ ಮೀನಿಗೂ ನೀಲಿ ಪಟ್ಟಿ ಇರುತ್ತದೆ. ಜೊತೆಗೆ ಇದರ ಹೊಟ್ಟೆ ಉಜ್ವಲ ಕೆಂಪು ಬಣ್ಣದ್ದು. ಸೂರ್ಯಕಿರಣ ಮೀನಿನ ಮೇಲೆ ಬಿದ್ದರೆ ಅದು ಕೆಂಡದಂತೆ ಅಥವಾ



ಕ್ರಿಸ್‌ಮಸ್ ಮರದ ಮೇಲಿನ ದೀಪಗಳಂತೆ ಪ್ರಜ್ವಲಿಸುತ್ತದೆ. ಕಪ್ಪು ನೀರಿನೊಳಗೆ ಸಸ್ಯಗಳ ಮಧ್ಯೆ ಇವು ಮಿನುಗುವ ದೀಪಗಳ ಸರಮಾಲೆಯಂತೆ ಫಳಫಳಿಸುವುದು ಒಂದು ಸುಂದರ ನೋಟ.

## ಬೆಕ್ಕು ಮೀನು

ಬೆಕ್ಕು ಮೀನು ನೀರಿನ ಕೆಳಗೆ ಮರಳಿನ ಮೇಲೆ ವಿಶ್ರಾಂತಿ ಪಡೆಯುತ್ತಾ ನಿಶ್ಚಲವಾಗಿ ಮಲಗಿರುತ್ತದೆ. ಅದರ ಮೀಸೆಗಳು ಮತ್ತು ಕಣ್ಣುಗಳು ಮಾತ್ರ ಚಲಿಸುತ್ತಿರುತ್ತವೆ. ಇದು ತನ್ನ ಸುತ್ತಲ ಪ್ರಪಂಚದ ಸಮಸ್ತ ಚರಾಚರ ವಸ್ತುಗಳ ಬಗ್ಗೆಯೂ



ಆಸಕ್ತಿ ಹೊಂದಿರುತ್ತದೆ.

ಇದು ತಳದಲ್ಲಿ ಮಲಗಿರುವುದರಿಂದ ಅದಕ್ಕೆ ಹಸಿವಾಗಿಲ್ಲ ಎಂದರ್ಥ. ಹಸಿವಾದಾಗ ಮರಳನ್ನು ಬಗೆಯುತ್ತಾ ಹುಳುಗಳಿಗಾಗಿ ಹುಡುಕಾಡಲಾರಂಭಿಸುತ್ತದೆ. ಕಲ್ಲು ಮರಳು ಬೇರುಗಳನ್ನು ಬಗೆದಂತೆ ನೀರ ಮೇಲೆ ದಟ್ಟವಾದ ಮೋಡ ಕವಿಯುತ್ತದೆ. ಬೆಕ್ಕು ಮೀನನ್ನು ನೀವು ಕಾಣಲಾರಿರಿ. ನೀರ ತಳದಲ್ಲಿ ಮೋಡ ಸಂಚರಿಸುತ್ತಿರುವಂತೆ ಭಾಸವಾಗುತ್ತದೆ.

## ವಜ್ರ ಮೀನು

ನನ್ನ ಅಕ್ವೇರಿಯಂನಲ್ಲಿ ವಜ್ರ ಮೀನುಗಳೂ ಇವೆ. ವಜ್ರ ಎನ್ನುವ ಹೆಸರು ಇವಕ್ಕೆ ಪೂರ್ಣ ಸಾರ್ಥಕ. ಏಕೆಂದರೆ ಕಾಮನಬಿಲ್ಲಿನ ಎಲ್ಲ ಬಣ್ಣಗಳೂ ಇದರ



ಮೈಯಲ್ಲಿ ವಜ್ರಗಳಂತೆ ಹೊಳೆಯುತ್ತವೆ.

ಚುರುಕಾಗಿ ಮತ್ತು ವೇಗವಾಗಿ ಚಲಿಸುವ ಈ ಮೀನುಗಳು ನೀರಿನೊಳಕ್ಕೆ ಎಸೆದ ಒಂದು ಹಿಡಿ ರತ್ನಾಭರಣಗಳಂತೆ ಫಳಫಳಿಸುತ್ತವೆ.

## ಬಾಲದಲ್ಲಿ ಕಿರೀಟವಿರುವ ಮೀನು

ಅಕ್ವೇರಿಯಂ ಪ್ರಿಯರ ಕಣ್ಣು ಬಲು ಚುರುಕು. ಈ ಮೀನಿಗೆ ಚಕ್ರವರ್ತಿಗಳು ಧರಿಸುವ ಕಿರೀಟದ ಆಕಾರದ ಬಾಲ ಇರುವುದನ್ನು ಪತ್ತೆಹಚ್ಚಿದ್ದಾರೆ. ಆದ್ದರಿಂದಲೇ ಇದಕ್ಕೆ



ಎಂಪರರ್ ಟೆಟ್ರ ಎಂದು ಹೆಸರು. ಸಸ್ಯಗಳ ಮಧ್ಯೆ ಈ ಮೀನುಗಳು ಒಟ್ಟಲಿನಂತೆ ಗುಂಪು ಗೂಡಿ ಮರಿಗಳಿಗೆ ಆಹಾರ ತಿನಿಸುತ್ತಿದ್ದರೆ ನಿಮಗೆ ಈ ಮೀನುಗಳು ಕಾಣುವುದೇ ಇಲ್ಲ. ಇವುಗಳ ಬಾಲಗಳು ಮಾತ್ರ, ಒಂದಷ್ಟು ಜನ ಕಿರೀಟ ಧರಿಸಿ ಚಲಿಸುತ್ತಿರುವಂತೆ ಕಾಣಿಸುತ್ತವೆ.

## ಚಿಕ್ಕದು, ಆದರೆ ಎಷ್ಟು ಶೀಘ್ರ ಹಾಗೂ ಚುರುಕು

ಕೆಂಪುಕಣ್ಣಿನ ತೆಳು ಹಳದಿಯ ಈ ಮೀನು ಹಸಿರು ಸಸ್ಯಗಳ ಹಿನ್ನೆಲೆಯಲ್ಲಿ ಬಲು ಸುಂದರ. ಇದೇ ನಿಂಬೆ ಬಣ್ಣದ ಟೆಟ್ರ. ನಮ್ಮ ಅರ್ಧರೂಪಾಯಿ ಬಿಲ್ಲೆಗಿಂತ ಸ್ವಲ್ಪ ದೊಡ್ಡದು. ಆದರೆ ಬಲು ಚೂಟಿ, ಬಲು ಚುರುಕು. ಇದನ್ನು ಹಿಡಿಯುವುದು ಸುಲಭ



ವೇನಲ್ಲ. ಇದಕ್ಕೆ ಅಕ್ವೇರಿಯಂ ಒಳಗಿನ ಅಂತರ್‌ಜಲದ ಸಸ್ಯ ಸಮೂಹದ ತೊಳಸುಬಳಸಿನಲ್ಲಿ ಮಾರ್ಗವು ಚೆನ್ನಾಗಿ ಗೊತ್ತು. ಇದು ಅವುಗಳೊಳಕ್ಕೆ ಬೇಗ ಚಿಮ್ಮಿಕೊಂಡು ಹೋಗುತ್ತೆ. ಈ ಮೀನು ಇಷ್ಟು ಚುರುಕಾಗಿ ಇಲ್ಲದಿದ್ದರೆ ಕಷ್ಟ ಖಂಡಿತ. ದೊಡ್ಡ ಮೀನುಗಳು ಇದನ್ನು ಗಬಕ್ ಎಂದು ಬಾಯಿಗೆ ಹಾಕಿಕೊಳ್ಳುತ್ತವೆ. ಆದರೆ ಇದು ಅವುಗಳ ಬಾಯಿಂದ ಪಾರಾಗಿ ನಮ್ಮ ಅಕ್ವೇರಿಯಂ ಅನ್ನು ಅಲಂಕರಿಸಿದೆ.

## ಮೀನು ವಿಶ್ರಾಂತಿ ತೆಗೆದುಕೊಳ್ಳುವ ರೀತಿ

ಮುದ್ದಾದ ಈ ಟೆಟ್ರ ಪೊದೆಯ ಕೆಳಗೆ ಅಡಗಿಕೊಂಡು ನಿಶ್ಚಲವಾಗಿ ನಿಂತಿದೆ. ಇದು ಸೂರ್ಯನ ಬಿಸಿಲ ತಾಪದಿಂದ ರಕ್ಷಣೆ ಪಡೆಯುತ್ತಿರಬಹುದು, ಅಥವಾ ಭೀತಿಯಿಂದ ಅಡಗಿ ಕೊಂಡಿರಬಹುದು, ಅಥವಾ ಸುಮ್ಮನೆ ವಿಶ್ರಾಂತಿ ಪಡೆ



ಯುತ್ತಿರಬಹುದು. ಮೀನುಗಳು ನಮ್ಮಂತೆ ನಿದ್ದೆ ಹೋಗುವು ದಿಲ್ಲ. ಅವು ಸ್ವಲ್ಪ ಕಾಲ ಈಜುವುದನ್ನು ನಿಲ್ಲಿಸಿ ಸ್ತಬ್ಧವಾಗಿರು ತ್ತವಷ್ಟೆ. ಅವು ಪ್ರತ್ಯೇಕವಾದ ಪ್ರಶಾಂತವಾದ ಸ್ಥಳವನ್ನು ಆರಿಸಿ ಕೊಂಡು ಈ ಸುಂದರ ಟೆಟ್ರದಂತೆ ಅಚಲವಾಗಿ ಒಂದು ಈಜು ರೆಕ್ಕೆಯನ್ನೂ ಅಲುಗಿಸದಂತೆ ನಿಂತಿರುತ್ತವೆ. ಅದರ ಬಾಲ ದೀಪ ದಂತೆ ಬೆಳಗದೆ ಇದ್ದಲ್ಲಿ ನೀವು ಅದನ್ನು ಗಮನಿಸದೆಯೇ ಹೋಗಬಹುದು.

## ಜೀವಂತ ಟಾರ್ಪೀಡೊ

ನೀರು ಪ್ರಶಾಂತವಾಗಿದೆ. ಒಂದು ಮೀನೂ ಕಾಣಿ ಸುತ್ತಿಲ್ಲ. ಹಠಾತ್ತನೆ ಪಟ್ಟೆಪಟ್ಟೆಯ ಮೀನೊಂದು ಟಾರ್ಪೀಡೊದಂತೆ ಕಾಣಿಸಿಕೊಳ್ಳುತ್ತದೆ. ಅದು ಆಹಾರ ವನ್ನು ಅರಸುತ್ತಾ ಹೊರಟ ಮೀನು. ಬೇಟೆಯಂಥ



ವಸ್ತು ಕಣ್ಣಿಗೆ ಬಿದ್ದ ಕೂಡಲೇ ಅದು ಕವಣೆಗೋಲಿ ನಿಂದ ಹೊರಟ ಕಲ್ಲಿನಂತೆ ಅತಿವೇಗದಲ್ಲಿ ಬೇಟೆಯತ್ತ ಮುನ್ನುಗ್ಗುತ್ತದೆ. ಆಹಾರದ ಬಳಿಗೆ ಹೋಗುವ ವರೆಗೂ ಅದು ಹೀಗೆಯೇ ಎಸೆತಗಳೊಂದಿಗೆ ಮುಂದು ವರಿಯುತ್ತದೆ. ಆಹಾರ ತಿಂದು ಹೊಟ್ಟೆ ತುಂಬಿದಾಗ ಅದು ಸಸ್ಯಗಳ ಮಧ್ಯೆ ಆರಾಮವಾಗಿ ಚಲಿಸುತ್ತದೆ. ಅದರ ಈಜುರೆಕ್ಕೆಗಳು ಮಾತ್ರ ಪಟಪಟಿಸುತ್ತಿರುತ್ತವೆ.

## ಕಾಂಗೊ ಟೆಟ್ರ

ಇದು ಉಷ್ಣವಲಯದ ಆಫ್ರಿಕಾದಿಂದ ಬಂದಿದೆ. ಅಲ್ಲಿ, ಕಾಂಗೊ ನದಿ ಇದರ ಮೂಲ ವಾಸ ಸ್ಥಳ. ಇದಕ್ಕೆ ಶತ್ರುವಿನಿಂದ ತಪ್ಪಿಸಿ ಕೊಳ್ಳುವುದು ಒಂದು ರೂಢಿಯಾಯಿತು, ಹೀಗಾಗಿ ಇದು ವೇಗದ ಈಜುಗಾರನಾಯಿತು. ಈಗ ಈ ಮೀನು ಅಕ್ವೇರಿಯಂನಲ್ಲಿ ವಾಸಿಸಲು



ಬಂದಿದೆ. ಇದು ಯಂತ್ರಚಾಲಿತ ದೋಣಿಯಂತೆ ಮೇಲೆ ಕೆಳಗೆ ಚಲಿಸುತ್ತದೆ. ಎಷ್ಟು ವೇಗವಾಗಿ ಚಲಿಸುತ್ತದೆ ಎಂದರೆ ವಿಶ್ರಾಂತಿ ಗಾಗಿ ನಿಲ್ಲುವವರೆಗೆ ನಿಮಗೆ ಸರಿಯಾಗಿ ಇದನ್ನು ನೋಡಲು ಸಾಧ್ಯ ವಿಲ್ಲ. ಇದನ್ನು ಹಿಡಿಯಬೇಕಾದರೆ ದೊಡ್ಡ ಬಲೆಯೇ ಬೇಕು. ಸಣ್ಣದಾದರೆ ಕುಪ್ಪಳಿಸಿ ಹೊರಗೋಡುತ್ತದೆ. ಪಕ್ಕಕ್ಕೆ ಜಿಗಿಯುತ್ತದೆ. ನೀವು ಎಷ್ಟೇ ಕಣ್ಣಲ್ಲಿ ಕಣ್ಣಿಟ್ಟುಕೊಂಡಿದ್ದರೂ ನಿಮಗೆ ಇದರ ಸುಳಿವು ಸಿಗುವುದೇ ಇಲ್ಲ.

## ಮಳೆಯ ನೆರವು

ಈ ಹಾರ್ಲೆಕ್ವಿನ್ (ಕೋಡಂಗಿ) ಮೀನು ಇಂಡೋನೇಸಿಯಾದಿಂದ ಪ್ರಪ್ರಥಮವಾಗಿ ಆಗಮಿಸಿದಾಗ ಅದರ ಬಗ್ಗೆ ಅಪಾರ ಮಮತೆ ಒಲವು ಕಂಡು ಬಂದಿತು. ಆದರೆ ಯಾರಿಂದಲೂ ಅಕ್ವೇರಿಯಂನಲ್ಲಿ



ಅದರ ಸಂತಾನಾಭಿವೃದ್ಧಿ ಸಾಧ್ಯವಾಗಲಿಲ್ಲ. ಯಾಕೆಂದರೆ ಮೊಟ್ಟೆಗಳು ಮರಿಯಾಗುವುದಕ್ಕೆ ಮೊದಲೇ ಸಾಯುತ್ತಿದ್ದವು. ನಂತರ ಮಳೆಯ ನೀರಿನಲ್ಲಿ ಇದರ ಸಂತಾನಾಭಿವೃದ್ಧಿಗೆ ಪ್ರಯತ್ನಿಸಿದೆವು. ಇದು ಫಲ ಕೊಟ್ಟಿತು. ಮರಿ ಮೀನುಗಳು ಮೊಟ್ಟೆಯೊಡೆದು ಬಂದು ದೊಡ್ಡವಾಗಿ ಬೆಳೆದವು. ಹೀಗೆ ಇದರ ತಳಿ ಅಭಿವೃದ್ಧಿ ಸಾಧ್ಯವಾಯಿತು.

## ಕಾಮನಬಿಲ್ಲಿನ ಮೀನು

ಅಕ್ವೇರಿಯಂನಲ್ಲಿ ಕ್ರಿಸ್‌ಮಸ್ ಮರದಂತೆ ಅಲಂಕಾರಗೊಂಡ ಹಸಿರು ಸಸ್ಯ ಕಂಡಲ್ಲಿ ಆಶ್ಚರ್ಯ ಪಡಬೇಡಿ. ಅದರ ಅರ್ಥ ಈ ಅಕ್ವೇರಿಯಂನಲ್ಲಿ ಕಾಮನಬಿಲ್ಲಿನ ಮೀನುಗಳಿವೆ ಎಂದು. ಸೂಕ್ಷ್ಮವಾದ ದಾರಗಳ ಮೇಲೆ ಪಾರದರ್ಶಕವಾದ ಪುಟ್ಟಪುಟ್ಟ ಗುಳ್ಳೆಗಳಿಂದ ಇವು ಹಸಿರು ಸಸ್ಯವನ್ನು



ಅಲಂಕರಿಸುತ್ತವೆ. ಆದರೆ ಈ ಗುಳ್ಳೆಗಳು ಕೇವಲ ಆಟಿಕೆಗಳಾಗಲೀ ಅಲಂಕರಣಗಳಾಗಲೀ ಅಲ್ಲ. ಇವು ಈ ಮೀನಿನ ಮೊಟ್ಟೆಗಳು.

ಕಾಮನಬಿಲ್ಲಿನ ಮೀನು ಕಲ್ಪನಾಶಕ್ತಿಯುಳ್ಳ ಪುಟ್ಟ ಮೀನು. ಇದು ತನ್ನ ಮೊಟ್ಟೆಗಳನ್ನು ಸಸ್ಯದ ರೆಂಬೆಗಳಿಗೆ ಅಂದವಾಗಿ ನೇತುಹಾಕಿ ಅವುಗಳೆದುರು ಸಂತೋಷದಿಂದ ಈಜಾಡುತ್ತದೆ. ಮರಿ ಮೊಟ್ಟೆಯೊಡೆದು ಹೊರಬಂದಾಗ ಈ ಮೀನಿಗೆ ಸಂಭ್ರಮವೋ ಸಂಭ್ರಮ. ಮೊಟ್ಟೆಗಳು ಪ್ರವಾಹದ ಸುಳಿ ಸೆಳೆತಗಳಿಗೆ ಸಿಕ್ಕಿ ಕಾಮನಬಿಲ್ಲಿನ ಎಲ್ಲ ಬಣ್ಣಗಳೊಂದಿಗೆ ಕಂಗೊಳಿಸುತ್ತವೆ.

## ಸೊಗಸುಗಾರ ಮೀನು

ಇದೊಂದು ಬಲು ಮುದ್ದಾದ ಮೀನು. ಅದರ ಕಪ್ಪು ನೀಲಿ ಮಿಶ್ರಿತ ಎದೆ ಕೋಟಿ ನೊಳಗಿನ ಷರ್ಟಿನಂತೆ ಕಾಣಿಸುತ್ತದೆ. ಈ ಕೋಟೇ ಎಲ್ಲ ಕೆಂಪು ಮತ್ತು ತೆಳು ನೀಲಿಯ



ಚೌಕುಳಿಗಳದು. ದೊಡ್ಡದಾಗಿ ಬೆಳೆದು ಈಜಲು ಕಲಿತನಂತರವೇ ಇದಕ್ಕೆ ಈ ನಯನ ಮನೋಹರ ಬಣ್ಣ ಬರುತ್ತದೆ. ಮರಿಯಾಗಿದ್ದಾಗ ಇದರ ಬಣ್ಣವೇ ಬೇರೆ – ಬೂದು ಬಣ್ಣ, ವ್ಯತ್ಯಾಸ ಗುರುತಿಸಲಾಗದಂಥದ್ದು. ಇದರಿಂದ ಅದರ ಶತ್ರುಗಳಿಗೆ ಅದನ್ನು ಕಾಣುವುದು ಕಷ್ಟ.

## ಹೊಟ್ಟೆಬಾಕ ಮೀನು

ಕಪ್ಪು ರೂಬಿ ಒಂದು ಚುರುಕಾದ ಪುಟ್ಟ ಮೀನು. ಇದಕ್ಕೆ ಹಿಂಗದ ಹಸಿವು. ಅದಕ್ಕೇ ಇದು ಹೊಟ್ಟೆಬಾಕ ಮೀನು !



ನೀರಿನೊಳಕ್ಕೆ ಆಹಾರ ಹಾಕಿದಾಗ ಕಪ್ಪು ರೂಬಿ ಕೂಡಲೇ ಅಲ್ಲಿರುತ್ತದೆ. ಇತರ ಮೀನುಗಳು ಅಲ್ಲಿಗೆ ಬರುವ ಹೊತ್ತಿಗೆ ಇದಾಗಲೇ ಹಲವಾರು ಹುಳುಗಳನ್ನು ನುಂಗಿರುತ್ತದೆ. ಬಹುಶಃ ಇದು ಇಷ್ಟು ಜಾಸ್ತಿ ತಿನ್ನುವುದರಿಂದಾಗಿಯೇ ಇರಬೇಕು ತುಂಬ ವೇಗದಿಂದ ಈಜಬಲ್ಲುದು.

## ರಕ್ಷಣಾತ್ಮಕ ಪಟ್ಟೆಗಳು

ಈ ಮೀನು ಇಂಡೋನೀಸಿಯಾದ ಸುಮಾತ್ರ ದ್ವೀಪದಿಂದ ಬಂದುದು. ಆದ್ದರಿಂದಲೇ ಇದಕ್ಕೆ ಸುಮಾತ್ರದ ಹುಲಿಪಟ್ಟೆ ಮೀನು ಎಂದು ಹೆಸರು. ಸುಮಾತ್ರದಲ್ಲಿ ಸೂರ್ಯ ಬೆಳಕು ಸಾಕಷ್ಟಿರುತ್ತದೆ. ಹಾಗಾಗಿ ಸ್ವಚ್ಛ ನೀರಿನಲ್ಲಿ ಹುಲಿಪಟ್ಟೆ ಮೀನುಗಳ ಗುಂಪುಗಳನ್ನು



ಪತ್ತೆಹಚ್ಚುವುದು ಸುಲಭ.

ಹುಲಿಪಟ್ಟೆ ಮೀನು ಬಣ್ಣದಲ್ಲಿ ಹಳದಿ. ಮೈ ಮೇಲೆ ಅಡ್ಡಡ್ಡ ಕಪ್ಪು ಪಟ್ಟೆಗಳು. ಈ ಬಣ್ಣಗಳು ಶತ್ರುಗಳ ಕಣ್ ತಪ್ಪಿಸಿ ಅಡಗಿಕೊಳ್ಳಲು ಸಹಾಯಕ. ಇದು ನೀರಿನ ತಳದಲ್ಲಿ ಮರಳಿನ ಮೇಲೆ ಸಸ್ಯಗಳ ಕಾಂಡ ಗಳ ಮಧ್ಯೆ ಸೂಕ್ತ ಸ್ಥಳ ಹುಡುಕಿಕೊಂಡು ನಿಲ್ಲುತ್ತದೆ. ಅದು ನಮಗೆ ಗೋಚರಕ್ಕೆ ಬರುವುದೇ ಇಲ್ಲ. ಕಪ್ಪು ಕಾಂಡಗಳು ಹಳದಿ ಮರಳಿನ ಮೇಲೆ ಮೀನಿನ ಮೈ ಮೇಲಿನ ಪಟ್ಟೆಗಳಂತೆಯೇ ಕಾಣುತ್ತವೆ.

## ಜೊಂಡುಗಳ ನಡುವೆ

ಇದು ಏಂಜೆಲ್ (ಗಂಧರ್ವ) ಮೀನು. ಈ ಮೀನುಗಳು ಅಮೆಜಾನ್ ನದಿಯಲ್ಲಿ ಜೊಂಡುಗಳ ನಡುವೆ ವಾಸಿಸುತ್ತವೆ. ಈ ಜೊಂಡುಗಳು ಎಷ್ಟು ದಟ್ಟವಾಗಿ ಬೆಳೆದಿರುತ್ತವೆ ಎಂದರೆ ಅವುಗಳ ಕಾಂಡಗಳ ಮಧ್ಯೆ ನುಸುಳುವುದು ಬಲು ಕಷ್ಟ. ಆದರೆ ಏಂಜೆಲ್ ಮೀನುಗಳು ಅತಿ ಸುಲಭವಾಗಿ ಈ ಜೊಂಡುಗಳ



ಒಳಗೆ ಹೊರಗೆ ಸಂಚರಿಸುತ್ತವೆ. ಏಕೆಂದರೆ ಇವುಗಳ ದೇಹ ಸಂಪೂರ್ಣ ಚಪ್ಪಟೆ. ಇವು ಸ್ವಚ್ಛ ನೀರಿನಲ್ಲಿ ಆಟವಾಡಲು ಜೊಂಡು ಪೊದೆಯಿಂದ ಹೊರಗೆ ಬರುತ್ತವೆ. ಶತ್ರುವಿನ ಸುಳಿವು ಕಂಡ ಕೂಡಲೇ ಜೊಂಡುಗಳೊಳಕ್ಕೆ ಹೋಗಿ ಅಡಗಿ ಕೂತುಕೊಳ್ಳುತ್ತವೆ. ಜೊಂಡುಗಳ ಮಧ್ಯೆ ಹೋಗಿ ಸೇರಿದ ಕೂಡಲೇ ಅವಕ್ಕೆ ಬೇಲಿ ಹಾಕಿದಷ್ಟು ಭದ್ರ. ಶತ್ರು ಇವನ್ನು ನೋಡಲು ಸಾಧ್ಯ ಆದರೆ ಜೊಂಡುಗಳೊಳಗೆ ಹೋಗಿ ಹಿಡಿಯುವುದು ಅಸಾಧ್ಯ. ಹೀಗಾಗಿ ಅದು ಬಂದ ದಾರಿಗೆ ಸುಂಕವಿಲ್ಲದಂತೆ ಹಸಿದ ಹೊಟ್ಟೆಯಲ್ಲೇ ವಾಪಸ್ಸಾಗುತ್ತದೆ.

## ನೀರಿನಡಿ ಸವಾರಿಗಳು

ಈ ಮೀನುಗಳೂ ಚಪ್ಪಟೆಯಾಗಿವೆ, ಆದರೆ ಗುಂಡಗಿವೆ, ಪುಟ್ಟ ತಟ್ಟೆಯ ಗಾತ್ರದವು. ಇವಕ್ಕೆ ಡಿಸ್‌ಕಸ್ ಮೀನು ಎಂದು ಹೆಸರು. ಡಿಸ್‌ಕಸ್ ಮೀನು ಮರಿಗಳನ್ನು ತುಂಬ ಚೆನ್ನಾಗಿ ನೋಡಿಕೊಳ್ಳುತ್ತದೆ. ಈಜಲು ಕಷ್ಟಪಡುವ ಮರಿಗಳಿಗೆ ಅವು



ಸಹಾಯ ಮಾಡುತ್ತವೆ. ಈ ಉದ್ದೇಶಕ್ಕಾಗಿ ಮರಿಗಳು ವಿಶೇಷ ರೀತಿಯ ಪುಟ್ಟ ದಾರಗಳನ್ನು ಹೊಂದಿರುತ್ತವೆ. ಈ ದಾರ ಗಳಿಂದ ಅವುಗಳನ್ನು ತಾಯಿತಂದೆಯರು ತಮ್ಮ ಒಡಲುಗಳಿಗೆ ಲಗತ್ತಿಸಿಕೊಳ್ಳುತ್ತವೆ. ಮರಿಗಳನ್ನು ಸಾಗಿಸುವ ಕಾರ್ಯದಲ್ಲಿ ಸುಸ್ತಾದಾಗ ತಾಯಿಮೀನು ಗಂಡನ ಬಳಿಗೆ ಹೋಗಿ ಮರಿಗಳನ್ನು ಕೊಡವುತ್ತದೆ. ತಕ್ಷಣವೇ ಮರಿಗಳು ತಂದೆಮೀನಿನ ದೇಹದ ಮೇಲೆ ಹೋಗಿ ಕೂರುತ್ತವೆ –"ಈಗ ನಿನ್ನ ಸರದಿ !" ಎಂಬಂತೆ.

## ರುಚಿಯಾಗಿದೆ, ಆದರೆ ಸಾಲದು

ನೀರಿನ ಮೇಲ್ಮೈ ಕೆಳಗೆ ಹಸಿರು ಸಸ್ಯ ಗಳ ಮಧ್ಯೆ ಕಪ್ಪು ರೇಖೆಯ ಕೆಂಪು ಬಾಲದ ಪೆನ್ಸಿಲ್ ಮೀನು ಅಡಗಿರುತ್ತದೆ. ಮುದ್ದಾದ ಈ ಮೀನಿಗೆ ದೇಹದಾದ್ಯಂತ ಕಪ್ಪಾದ ಪಟ್ಟೆ



ಗಳಿರುತ್ತವೆ. ಈ ಮೀನು ಸೊಳ್ಳೆಗಳನ್ನು ಗಮನಿ ಸುತ್ತಾ ಹಿಡಿಯಲು ಕಾಯುತ್ತಾ ತನ್ನ ಬಾಲದ ಮೇಲೆ ಗಂಟೆಗಟ್ಟಲೆ ನಿಂತಿರುತ್ತದೆ. ನೀರ ಮೇಲಿನ ಗಾಳಿಯ ತುಂಬ ಈ ಸೊಳ್ಳೆಗಳೇ. ಸೊಳ್ಳೆ ಸುಮ್ಮನೆ ನೀರ ಮೇಲ್ಮೈ ಮೇಲೆ ತಾಗಿದರೆ ಸಾಕು ಅದು ಪೆನ್ಸಿಲ್‌ನ ಬಾಯಿ ವಶ. ರುಚಿಯಾಗಿದೆ, ಆದರೆ ಸಾಲದು !

## "ಅತ್ಯಂತ ಬುದ್ಧಿವಂತ ಮೀನು"

ಹೆಡ್‌ಸ್ಟ್ಯಾಂಡರ್ ಎಂದು ಕರೆಯಲ್ಪಡುವ ಈ ಮೀನು ಸದಾ ತಲೆಯ ಮೇಲೆ ನಿಂತಿರುತ್ತದೆ. ಇದು ಹುಳುಗಳಿಗಾಗಿ ಹುಡುಕುತ್ತ ಕೆಸರು ಮತ್ತು ಮರಳು ಕೆದಕಲು ಬಹು ಸೌಖ್ಯವಾದ ನಿಲುವು. ಈ ನಿಲುವಿಗೆ ಇದು ಎಷ್ಟು ಹೊಂದಿಕೊಂಡಿದೆ ಎಂದರೆ ಹೊಟ್ಟೆ ತುಂಬಿದ ಮೇಲೂ ಹಾಗೇ ನಿಂತಿರುತ್ತದೆ. ಆದ್ದರಿಂದಲೇ ಇದನ್ನು "ಅತ್ಯಂತ



ಬುದ್ಧಿವಂತ ಮೀನು" ಎಂದು ತಮಾಷೆ ಮಾಡುತ್ತಾರೆ. ಏಕೆಂದರೆ ಇದರ ತಲೆ ಭಾರ, ಮುಂಭಾರವಾಗಿ ಭೂಮಿಗಭಿಮುಖವಾಗಿ ಬಾಗಿ ನಿಂತಿರುತ್ತದೆ.

ಹೆಡ್‌ಸ್ಟ್ಯಾಂಡರ್‌ನ ಮೊಟ್ಟೆಗಳಿಗೆ ಹೊರ ಗಟ್ಟಿ ಹೊದಿಕೆ ಇರುತ್ತದೆ. ಮರಿಗಳು ಇದನ್ನು ಭೇದಿಸಿಕೊಂಡು ಹೊರಬರಲಾರವು. ಕೆಲವು ವೇಳೆ ಅಕ್ವೇರಿಯಂನಲ್ಲಿ ಪುಟ್ಟ ಮರಿಯೊಂದು ಮೊಟ್ಟೆಯ ಹೊದಿಕೆಯನ್ನು ಪೂರ್ಣವಾಗಿ ಒಡೆದು ಹೊರಬರಲಾರದೆ ಒಳಗಡೆಯೇ ಹೆಣಗಾಡುತ್ತಿರುತ್ತೆ. ಇಂಥ ಸಂದರ್ಭದಲ್ಲಿ ನಾವು ಸೂಜಿಯಿಂದ ಮೊಟ್ಟೆಯನ್ನು ಚುಚ್ಚುತ್ತೇವೆ, ಮರಿ ಪುಳಕ್ಕೆಂದು ಹೊರಬರುತ್ತದೆ.

## ಚುಕ್ಕಾಣಿ ಹಾಗೂ ಹುಟ್ಟುಗೋಲು

ಈ ಮೀನು ಬಾಣದಂತೆ ಕಾಣಿಸುತ್ತದೆ. ಹಾರಿಹೋಗುತ್ತಿರುವ ಬಾಣದಂತೆ ವೇಗವಾಗಿ ಈಜುತ್ತದೆ. ಇದರ ಈಜುರೆಕ್ಕೆಗಳು ಚುಕ್ಕಾಣಿ ಮತ್ತು ಹುಟ್ಟುಗೋಲುಗಳಾಗಿ ಕೆಲಸಮಾಡುತ್ತವೆ. ಕೆಲವು ಸಾರಿ ನಿಯಂತ್ರಿಸುವ ಬ್ರೇಕ್ ಆಗಿಯೂ ನೆರವಾಗುತ್ತವೆ. ನಿಲ್ಲಬೇಕೆನಿಸಿದಾಗ ಈ ಮೀನು ಈಜುರೆಕ್ಕೆಗಳನ್ನು ಹರಡುತ್ತದೆ.



ಅವು ನಿಯಂತ್ರಿಸುವ ಬ್ರೇಕ್ ಆಗಿ ಕೆಲಸಮಾಡುತ್ತವೆ. ಆಗ ಮೀನು ಸ್ತಬ್ಧವಾಗಿ ನಿಲ್ಲುತ್ತದೆ. ಇವು ಅನೇಕ ವೇಳೆ ಅದರ ಪ್ರಾಣವನ್ನೂ ಉಳಿಸುತ್ತವೆ. ಶತ್ರು ಬೆನ್ನಟ್ಟಿ ಬಂದಾಗ ಮೀನು ಸಸ್ಯಗಳಲ್ಲಿ ನುಗ್ಗಿ ಸ್ತಬ್ಧವಾಗಿ ಅಡಗಿ ನಿಲ್ಲುತ್ತದೆ. ಆದರೆ ಅದೇ ಹೊತ್ತಿನಲ್ಲಿ ಶತ್ರುವಿನ ಜಡತ್ವ ಬಲ ಅದನ್ನು ಮುಂದಕ್ಕೊಯ್ಯುತ್ತದೆ. ಅದು ತನ್ನ ವೇಗವನ್ನು ನಿಧಾನಿಸಿಕೊಂಡು ನೋಡಿದಾಗ ಬೇಟೆಯ ಸುಳಿವೇ ಸಿಗುವುದಿಲ್ಲ. ಈಗಷ್ಟೆ ಇಲ್ಲಿತ್ತು, ತಕ್ಷಣವೇ ಇಲ್ಲದಾಗಿದೆಯಲ್ಲ! ಶತ್ರು ಮೀನು ಬೇರೆ ಬೇಟೆಯನ್ನು ಅರಸಿಕೊಂಡು ಮುಂದೆ ಸಾಗುತ್ತದೆ.

## ಪ್ರೀತಿಯ ಪೋಷಕರು

ಈ ಕುಂದಣಿದ ಮೀನು ಅಕ್ವೇರಿಯಂನ ಸುತ್ತ ಬಲು ಪ್ರಶಾಂತವಾಗಿ ಆದರೆ ತನ್ನ ಮಹತ್ತ್ವವನ್ನು ಸಾರುತ್ತಾ ಈಜಾಡುತ್ತಿರುತ್ತದೆ. ಮೊಟ್ಟೆ ಇಡುವ ಕಾಲ ಬಂದಾಗ ಒಂದು ಸ್ಥಳ ಆರಿಸಿಕೊಂಡು ಕಲ್ಲೊಂದರ ಮೇಲೆ ಮೊಟ್ಟೆಗಳನ್ನಿರಿಸಿ ಕಾವಲು ಕಾಯುತ್ತ ನಿಲ್ಲುತ್ತೆ. ಒಂದು ಮೀನನ್ನೂ ಅದರ ಬಳಿ ಸುಳಿಯಲು



ಬಿಡುವುದಿಲ್ಲ. ಆಹಾರಕ್ಕಾಗಿ ಮಾತ್ರ ಇದು ಕಾವಲು ತೆರವು ಮಾಡುತ್ತದೆ. ತಾಯಿಮೀನು ಆಹಾರಕ್ಕೆ ಹೋದಾಗ ತಂದೆಮೀನು ಮೊಟ್ಟೆಗಳ ಕಾವಲು ಕಾಯುತ್ತದೆ. ಹೀಗೆ ಪ್ರೀತಿಯ ಪೋಷಕರಂತೆ ಸರದಿಯ ಮೇಲೆ ಗಂಡು ಮತ್ತು ಹೆಣ್ಣು ಮೀನುಗಳು ಮೊಟ್ಟೆಗಳನ್ನು ಕಾವಲು ಕಾಯುತ್ತವೆ. ಅಪ್ಪಿ ತಪ್ಪಿ ಯಾವುದಾದರೂ ಮೀನು ಈ ಮೊಟ್ಟೆಗಳಿಗೆ ಹಾನಿ ಮಾಡಲು ಪ್ರಯತ್ನಿಸಿದಲ್ಲಿ ಅದರ ಗತಿ ಮುಗಿಯಿತು. ಅಂತಹವುಗಳಿಗೆ ಕಾವಲು ಮೀನು ಎಂತಹ ಪೆಟ್ಟು ಕೊಡುತ್ತದೆಂದರೆ ಅವು ತತ್ತರಿಸುತ್ತವೆ.

## ಸುರಕ್ಷಿತ ಸ್ಥಳದಲ್ಲಿ ಮೊಟ್ಟೆಗಳು

ಈ ಮೀನಿನ ಹೆಸರು ತುಂಬ ಉದ್ದ. ನೆನಪಿನಲ್ಲಿರಿಸುವುದೇ ಕಷ್ಟ. ಇದನ್ನು ಸೊಡೊಟ್ರೋಫಿಯಸ್ ಔರಾಟಸ್ ಎಂದು ಕರೆಯ ಲಾಗುತ್ತೆ. ಇದೊಂದು ಚಾಣಾಕ್ಷ ಪುಟ್ಟ ಮೀನು. ಇತರ ಮೀನು ಗಳು ತನ್ನ ಮೊಟ್ಟೆಗಳನ್ನು ತಿನ್ನದಿರಲೆಂದು ಇದು ಅವನ್ನು ತನ್ನ



ಬಾಯಿಯೊಳಗೆ ಅಡಗಿಸಿ ಇರಿಸಿರುತ್ತೆ. ಹೀಗೆ ಅದು ತನ್ನ ಬಾಯನ್ನು ಹನ್ನೆರಡು ದಿನಗಳವರೆಗೆ ಮುಚ್ಚಿಕೊಂಡು ಇರುತ್ತೆ. ಆಹಾರ ತಿನ್ನಲೂ ಬಾಯಿ ತೆರೆಯುವುದಿಲ್ಲ. ಈ ಅವಧಿಯಲ್ಲಿ ಅದು ಮೊಟ್ಟೆಗಳನ್ನಿರಿಸಲು ತನ್ನ ತಳದವಡೆಯ ಕೆಳಗೆ ಒಂದು ವಿಶೇಷ ಚೀಲವನ್ನೂ ಬೆಳೆಸಿ ಕೊಳ್ಳುತ್ತೆ. ಮೊಟ್ಟೆಗಳು ಸುರಕ್ಷಿತವಾಗಿದ್ದರೆ ಸಾಕು, ಅದು ಉಪ ವಾಸದಿಂದಿರಲೂ ಸಿದ್ಧ. ಹಾಗಾಗಿ ಮರಿಗಳು ಸುರಕ್ಷಿತವಾಗಿ ಸುಖ ವಾಗಿ ಮೊಟ್ಟೆ ಒಡೆದುಕೊಂಡು ಹೊರಬರುತ್ತವೆ.



Betta splendens



Barbus spes (Odessa-Barbe)



Cichlasoma cyanoguttatum



Badis badis



Julidochromis ornatus



Carassius auratus auratus



Metynnis hypsauchen



Aphyosemion walkeri



*Trichogaster trichopterus spec. gold*



*Enneacanthus obesus*



*Trichogaster "cosby"*



*Pterophyllum eimekei*



*Barbus conchonius*



*Xiphophorus helleri*



*Lebistes reticulatus*



*Brachydanio rerio*

**В. Дацкевич**

ЦВЕТНЫЕ ПЛАВНИЧКИ

*на каннада*

**V. Datskevich**

MULTI-COLOURED FINS

*in Kannada*

Перевод сделан по книге:
В. Дацкевич. Цветные плавнички.
М. «Дет. лит.», 1972 г.
Для младшего школьного возраста



ಸೋವಿಯತ್ ಒಕ್ಕೂಟದಲ್ಲಿ ಮುದ್ರಿತವಾದುದು

D $\frac{4803010102-042}{031(05)-86}$ 176—86




ISBN 5-05-000812-3